in this regard should invariably have mention of nature/ items of work executed, along with date of commencement and date of completion, otherwise the technical bid is liable for disqualification.

5) For proof of Financial Capacity Line of Credit from any Scheduled Bank shall be invariably produced for the particular work in the proforma prescribed in the technical Bid for an amount equal to 10% of the amount put to tender. Failure to submit the Line of Credit along with Technical Bid lead to disqualification.
6) The Bid security (EMD) must accompany Bids in the specified form in the Technical Bid is to be valid for 45 days beyond the validity of Bid (i.e. 120 days+ 45 days).
7) All documents enclosed in support of technical bids, shall be **attested by a Gazetted officer not below the rank of District Level Officer,** otherwise the bids are liable for disqualification. The original documents should be produced for verification at any stage of tender process as and when sought for. Failure to produce original documents leads to disqualification of technical bids.
8) Only relevant certificates and details shall be furnished with the technical bid. Details of Company/ Agencies/ Firms profile be enclosed.
9) Tendering by Joint Venture is not allowed.
10) The Competent authority reserves the right to reject any or all the tenders without assigning any reasons.
11) Conditional tenders will not be accepted.

Any other details regarding the work can be obtained from the above office during office hours.

Executive Engineer,
NH Division, Bangalore.

PR-531

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 107 ಡಿಟಿಎಂ 2005, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2005**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ವಿವಿಧ ಕಛೇರಿಗಳಲ್ಲಿ ಈ ಕೆಳಕಂಡ ಮೆ: ರಿಕೋ ಇಂಡಿಯಾ ಲಿಮಿಟೆಡ್ ಸಂಸ್ಥೆಯ ವಿವಿಧ ಮಾದರಿಯ ಯಂತ್ರಗಳಿದ್ದು, ಇವುಗಳ ವಿಸ್ತಾರವಾದ (Comprehensive) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಲು ಸರ್ಕಾರವು ಉದ್ದೇಶಿಸಿ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಿದೆ.

| ಕ್ರ.ಸಂ. | ರಿಕೋ ಕಾಪಿಯರ್ ಯಂತ್ರದ ನಮೂನೆ | ಸಂಖ್ಯೆ |
|---|---|---|
| 1. | ಎಫ್‌ಟಿ 4615 | 27 |
| 2. | ಎಫ್‌ಟಿ 4621 | 22 |
| 3. | ಎಫ್‌ಟಿ 4618 | 01 |
| | **ಒಟ್ಟು** | **50** |

ಇಚ್ಛೆಯುಳ್ಳವರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಕೊಠಡಿ ಸಂಖ್ಯೆ: 25, ನೆಲಮಹಡಿ, ವಿಧಾನಸೌಧ ಇಲ್ಲಿ ರೂ.100.00 +ಶೇಕಡಾ 12.5 ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀದಿಯನ್ನು ಪಡೆದು ಅನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಕಾರ್ಯದರ್ಶಿ-1), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಇಲ್ಲಿ ರಸೀದಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿನಾಂಕ: 18.10.2005 ರಂದು ಮಧ್ಯಾಹ್ನ 3:30 ಗಂಟೆಯವರೆಗೆ ಟೆಂಡರ್ ಅರ್ಜಿಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 19.10.2005 ರಂದು ಮಧ್ಯಾಹ್ನ 3:30 ಗಂಟೆ. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲೆಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು-560 001 ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ **ದಿನಾಂಕ: 19.10.2005ರಂದು ಮಧ್ಯಾಹ್ನ 4:30 ಗಂಟೆಗೆ ತೆರೆಯಲಾಗುವುದು.** ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1) ಟೆಂಡರ್ ಅರ್ಜಿಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2) ಮೊಹರಾದ ಟೆಂಡರ್ ಲಕೋಟೆಯ ಮೇಲೆ "ರಿಕೋ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.
3) ಟೆಂಡರ್‌ದಾರರು ಈಗಾಗಲೇ ಇಂತಹ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ಮಾಡುತ್ತಿರುವುದಕ್ಕೆ ದಾಖಲೆ: ಮಾಹಿತಿಯನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು.

4) ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
5) ಪ್ರತಿ ನಮೂನೆಯ ಯಂತ್ರಕ್ಕೂ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕು (Comprehensive) ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
6) ಮುಂಗಡ ಠೇವಣಿ (ಇ.ಎಂ.ಡಿ.) ಮೊತ್ತ ರೂ. 5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು, ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7) ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು. ದರಪಟ್ಟಿಯೊಂದಿಗೆ ವ್ಯಾಟ್ ರಿಜಿಸ್ಟ್ರೇಷನ್ ಬಗ್ಗೆ ಮಾಹಿತಿಯನ್ನು ಒದಗಿಸುವುದು.
8) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರು ಬಂದಾಗ ದುರಸ್ಥಿ ಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೆ ಎರಡು ಬಾರಿ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು, ಒಬ್ಬ ತಂತ್ರಜ್ಞರನ್ನು ಖಾಯಂ ಆಗಿ ವಾರ್ಷಿಕ ಸೇವಾ ನಿರ್ವಹಣೆ ಅವಧಿಯಲ್ಲಿ ಸಚಿವಾಲಯಕ್ಕೆ ನಿಯೋಜಿಸುವುದು.
9) ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ದೃಢೀಕರಣದ ಆಧಾರದ ಮೇಲೆ ಪ್ರತಿ ಮೂರು ತಿಂಗಳಿಗೊಮ್ಮೆ ನಾಲ್ಕು ಸಮಾನ ಕಂತುಗಳಲ್ಲಿ ಸೇವಾ ಹಣವನ್ನು ಸಂದಾಯ ಮಾಡಲಾಗುವುದು.

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1) ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22033440 ಅಥವಾ 22033487 ರಲ್ಲಿ ಸಂಪರ್ಕಿಸಬಹುದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

## ಟೆಂಡರ್ ನಮೂನೆ

ಟೆಂಡರ್ ನಮೂನೆ ಸಂಖ್ಯೆ:

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿರುವ 50 ಸಂಖ್ಯೆಯ ರಿಕೋ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆಯ ಬಗ್ಗೆ ಟೆಂಡರ್.

| | | |
|---|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : | ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು-560 001. |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : | 19.10.2005 ಮಧ್ಯಾಹ್ನ 3:30 ಗಂಟೆಯೊಳಗೆ. |
| ಟೆಂಡರ್ ತೆರೆಯುವ ದಿನಾಂಕ | : | 19.10.2005 ಮಧ್ಯಾಹ್ನ 4:30 ಗಂಟೆಗೆ ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು. |
| ಟೆಂಡರ್ ಫಾರಂ ದರ | : | ರೂ. 100.00 + ಶೇಕಡಾ 12.5 ಮೌಲ್ಯವರ್ಧಿತ ತೆರಿಗೆ (ರೂಪಾಯಿ ಒಂದು ನೂರ ಹದಿನಾಲ್ಕು ಮಾತ್ರ) |

**ಟೆಂಡರ್‌ದಾರರ ಗಮನಕ್ಕೆ:**

1) ಟೆಂಡರ್ ಲಕೋಟೆಯ ಮೇಲೆ "ರಿಕೋ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆ, ದಿನಾಂಕ ಕಡ್ಡಾಯವಾಗಿ ಬರೆಯತಕ್ಕದ್ದು.
2) ದರಗಳನ್ನು ಇದರೊಂದಿಗೆ ಲಗತ್ತಿಸಿರುವ ನಮೂನೆಯಲ್ಲಿಯೇ ನೀಡತಕ್ಕದ್ದು.
3) ನಮೂದಿಸುವ ದರವು ತೆರಿಗೆ, ಸಾಗಾಣಿಕೆ ಇತ್ಯಾದಿಗಳನ್ನು ಒಳಗೊಂಡಿರಬೇಕು.
4) ಪ್ರತಿ ನಮೂನೆಯ ಯಂತ್ರಕ್ಕೂ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕು. (Comprehensive) ಡ್ರಮ್, ಡೆವಲಪರ್ ಹಾಗೂ ಟೋನರ್ ಹೊರತುಪಡಿಸಿ ಉಳಿದ ಎಲ್ಲಾ ಬಿಡಿಭಾಗಗಳನ್ನೊಳಗೊಂಡಿರಬೇಕು ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
5) ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ತೆರಿಗೆಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಿ ಸರ್ಕಾರ ನೇರವಾಗಿ ಪಾವತಿಸುವುದು.
6) ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
7) ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53 ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು. ದರಪಟ್ಟಿಯೊಂದಿಗೆ ವ್ಯಾಟ್ ರಿಜಿಸ್ಟ್ರೇಷನ್ ಬಗ್ಗೆ ಮಾಹಿತಿಯನ್ನು ಒದಗಿಸುವುದು.
8) ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರು ಬಂದಾಗ ದುರಸ್ಥಿ ಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೆ ಎರಡು ಬಾರಿ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು, ಒಬ್ಬ ತಂತ್ರಜ್ಞರನ್ನು ಖಾಯಂ ಆಗಿ ವಾರ್ಷಿಕ ಸೇವಾ ನಿರ್ವಹಣೆ ಅವಧಿಯಲ್ಲಿ ಸಚಿವಾಲಯಕ್ಕೆ ನಿಯೋಜಿಸುವುದು. ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ದೃಢೀಕರಣ ಆಧಾರದ ಮೇಲೆ ಪ್ರತಿ ಮೂರು (03) ತಿಂಗಳಿಗೊಮ್ಮೆ ನಾಲ್ಕು (04) ಸಮಾನ ಕಂತುಗಳಲ್ಲಿ ಸಂದಾಯ ಮಾಡಲಾಗುವುದು.

9) ಮುಂಗಡ ಠೇವಣಿ (ಇ.ಎಂ.ಡಿ.) ಮೊತ್ತ ರೂ.5000.00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು, ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

10) ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ವಾರ್ಷಿಕ ಸೇವಾ ನಿರ್ವಹಣೆಯ ಅವಧಿಯು ಮುಕ್ತಾಯಗೊಂಡ ನಂತರ ಅವರ ಕಾರ್ಯನಿರ್ವಹಣೆ ಬಗ್ಗೆ ಯಾವುದೇ ದೂರು ಇಲ್ಲದಿದ್ದಲ್ಲಿ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

11) ಅಯಶಸ್ಸು ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

12) ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 19.10.2005 ರಂದು ಮಧ್ಯಾಹ್ನ 3:30 ಗಂಟೆಯೊಳಗೆ ಸಿ.ಆ.ಸು.ಇ. (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು-560 001 ಈ ಕಛೇರಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

13) ದರಪಟ್ಟಿಯೊಂದಿಗೆ ಠೇವಣಿಯನ್ನು (ಇ.ಎಂ.ಡಿ.) ಮೊತ್ತ ನೀಡದಿದ್ದಲ್ಲಿ ಮತ್ತು ಮೇಲಿನ ಅಂಶಗಳಿಗೆ ಪೂರ್ಣ ವಿವರವನ್ನು ನೀಡದಿದ್ದಲ್ಲಿ ಅಂತಹ ಟೆಂಡರ್ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಯಾವುದೇ ಕಾರಣವನ್ನು ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

## ಅನುಬಂಧ

**ಟೆಂಡರ್ ಪ್ರಕಟಣೆ ಸಂಖ್ಯೆ: ಸಿಆಸುಇ 107 ಡಿಟಿಎಂ 2005, ವಾರ್ಷಿಕ ಸೇವಾ ನಿರ್ವಹಣೆಯ ದರ**

| ಕ್ರ.ಸಂ. | ಮೋದಿ ಕಾಪಿಯರ್ ಯಂತ್ರದ ನಮೂನೆ | ದರ ರೂ. (ಒಂದು ಯಂತ್ರಕ್ಕೆ) | ತೆರಿಗೆ |
|---|---|---|---|
| 1. | ಎಫ್‌ಟಿ 4615 | | |
| 2. | ಎಫ್‌ಟಿ 4621 | | |
| 3. | ಎಫ್‌ಟಿ 4618 | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಹೆಚ್.ಕೆ. ರವಿಮೂರ್ತಿ**
ಪಿ.ಆರ್. 532 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು
## ತಿದ್ದುಪಡಿ

**ಸಂಖ್ಯೆ: ಇ.ಪ.(1) 1559/ 2005-06/ ಪಿಎಸ್‌ಸಿ, ಬೆಂಗಳೂರು, ದಿನಾಂಕ:17ನೇ ಸೆಪ್ಟೆಂಬರ್, 2005**

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 1450/ 2005-06/ ಪಿಎಸ್‌ಸಿ ದಿನಾಂಕ: 16.08.2005ರಲ್ಲಿ ಪ್ರಕಟಿಸಲಾಗಿರುವ 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ "ಬೆಂಗಳೂರು" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಎ'ರ ಅಡಿಯಲ್ಲಿ ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ವಿಷಯದ ಶೀರ್ಷಿಕೆಯ ಕೆಳಗೆ ಸಾಮಾನ್ಯದರ್ಜೆ ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 20446ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ
ಪಿ.ಆರ್. 533 ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು, ಕರ್ನಾಟಕ
ಲೋಕಸೇವಾ ಆಯೋಗ, ಬೆಂಗಳೂರು.

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು
## ತಿದ್ದುಪಡಿ

**ಸಂಖ್ಯೆ: ಇ.ಪ.(1) 1526/ 2005-06/ ಪಿಎಸ್‌ಸಿ, ಬೆಂಗಳೂರು, ದಿನಾಂಕ:8ನೇ ಸೆಪ್ಟೆಂಬರ್, 2005**

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 4188/ 2004-05/ ಪಿಎಸ್‌ಸಿ ದಿನಾಂಕ: 15.03.2005ರಲ್ಲಿ ಪ್ರಕಟಿಸಲಾಗಿರುವ 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ "ಮಂಗಳೂರು" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಎ'ರ ಅಡಿಯಲ್ಲಿ ರೆವಿನ್ಯೂ ಹೈಯರ್ ಭಾಗ-2 ವಿಷಯದ ಶೀರ್ಷಿಕೆಯ ಕೆಳಗೆ ಪ್ರಥಮ ದರ್ಜೆ ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 31418ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ
ಪಿ.ಆರ್. 534 ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು, ಕರ್ನಾಟಕ
ಲೋಕಸೇವಾ ಆಯೋಗ, ಬೆಂಗಳೂರು.

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಟೆಂಡರ್ ತಿದ್ದುಪಡಿ ಮತ್ತು ಅವಧಿ ವಿಸ್ತರಣೆ-4

**ವಿಷಯ:** ಶಿವಮೊಗ್ಗ ನಗರದಲ್ಲಿ ತುಂಗಾ ಎಡದಂಡೆ ನಾಲೆಯ ಕಿ.ಮೀ. 20.80 ರಲ್ಲಿ ಲಕ್ಷ್ಮೀ ಟಾಕೀಸ್ ಹತ್ತಿರ ಸೇತುವೆ ನಿರ್ಮಾಣ.

**ಉಲ್ಲೇಖ:** 1. ಈ ಕಛೇರಿಯ ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ:ಬಿಡಿಎನ್-4/ ಟೆಂಡರ್ ಪ್ರಕಟಣೆ/ 2004-05, 4138 ದಿನಾಂಕ:24.01.2005.

2. ಈ ಕಛೇರಿ ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: :ಬಿಡಿಎನ್-4/ ಪಿ.ಬಿ. -4/ ಟೆಂಡರ್ ತಿದ್ದುಪಡಿ ಪ್ರಕಟಣೆ ಸಂಖ್ಯೆ: 2004-05, 4739 ದಿನಾಂಕ: 25.02.2005.

3. -ಸಮ- 2005-06/ 638 ದಿನಾಂಕ: 16.05.2005.

4. -ಸಮ- 2005-06/ 1374 ದಿನಾಂಕ: 16.07.2005.

ಉಲ್ಲೇಖ 1ರಲ್ಲಿ ಹೊರಡಿಸಿರುವ ಅಲ್ಪಾವಧಿ ಟೆಂಡರ್ ಪ್ರಕಟಣೆ ಮತ್ತು ಉಲ್ಲೇಖ 2 ರಿಂದ 4ರಲ್ಲಿರುವ ಟೆಂಡರ್ ಅವಧಿ ವಿಸ್ತರಣೆಯ ಪ್ರಕಟಣೆಗಳನ್ನು ಹೊರಡಿಸಲಾಗಿತ್ತು. ಉಲ್ಲೇಖ 4ರಲ್ಲಿರುವ ಟೆಂಡರ್ ಅವಧಿ ವಿಸ್ತರಣೆ-3 ಪ್ರಕಟಣೆ ಮುಂದುವರೆದಂತೆ, ಈ ಕೆಳಗಿನಂತೆ ತಿದ್ದುಪಡಿ ಮಾಡಲಾಗಿದೆ ಹಾಗೂ ಅವಧಿಯನ್ನು ವಿಸ್ತರಿಸಲಾಗಿದೆ.

1. ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: : 09.11.2005 ಸಂಜೆ 5.30 ಗಂಟೆಯವರೆಗೆ.
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: : 10.11.2005 ಸಂಜೆ 5.30 ಗಂಟೆಯವರೆಗೆ.
3. ತುಂಬಿದ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ: : 11.11.2005 ಸಂಜೆ 4.00 ಗಂಟೆಯವರೆಗೆ.

ಟೆಂಡರ್ ಪ್ರಕಟಣೆಗಳಲ್ಲಿ ಪ್ರಕಟಿಸಿರುವ ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

**ಎಸ್.ಹೆಚ್. ಮಂಜಪ್ಪ**

ಪಿ.ಆರ್. 535 ಕಾರ್ಯಪಾಲಕ ಅಭಿಯಂತರು, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

## ಉಪ ನಿರ್ದೇಶಕರ ಕಛೇರಿ, ರಾಷ್ಟ್ರೀಯ ಸಂಯೋಜಿತ ಕುಕ್ಕುಟ ತಳಿವರ್ಧನಾ ಯೋಜನೆ, ರಾಜ್ಯ ಕುಕ್ಕುಟ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-560 089

## ಹರಾಜು ಪ್ರಕಟಣೆ

### ಸಂಖ್ಯೆ: ಉನಿ: ರಾಕುಕ್ಷೇ: ಹೆ: ಪ್ಲಾಚೀಹ: 05-06, ದಿನಾಂಕ: 17ನೇ ಸೆಪ್ಟೆಂಬರ್, 2005

ಈ ಮೂಲಕ ಸಮಸ್ತ ಜನರಿಗೆ ತಿಳಿಸುವುದೇನೆಂದರೆ, ರಾಜ್ಯ ಕುಕ್ಕುಟ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-560089 ರಲ್ಲಿ 8000 ಸಂಖ್ಯೆ ಖಾಲಿ ಪ್ಲಾಸ್ಟಿಕ್ ಚೀಲಗಳು (ಕೋಳಿ ಆಹಾರ) ಎಲ್ಲಿವೆಯೋ, ಹೇಗಿವೆಯೋ ಹಾಗೆ ಈ ಕ್ಷೇತ್ರದ ಆವರಣದಲ್ಲಿ ದಿನಾಂಕ: 07.11.2005ರಂದು ಬೆಳಿಗ್ಗೆ 11.00 ಕ್ಕೆ (ಸೋಮವಾರ) ಬಹಿರಂಗವಾಗಿ ಹರಾಜು ಮಾಡಲಾಗುತ್ತದೆ.

ಆದ್ದರಿಂದ ಆಸಕ್ತರು ಭಾಗವಹಿಸಬಹುದು. ಇತರೆ ನಿಬಂಧನೆಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಡಾ: ಎಸ್. ಮಾರಿಮುತ್ತು**

ಪಿ.ಆರ್. 536 ಉಪ ನಿರ್ದೇಶಕರು,
ರಾಜ್ಯ ಕುಕ್ಕುಟ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89.

## ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿ

### ಹರಾಜು ಪ್ರಕಟಣೆ ಸಂಖ್ಯೆ: ಕೈತಸಂಮ: ಖರೀದಿ: ಹರಾಜು: 04-05, ದಿನಾಂಕ: 13ನೇ ಸೆಪ್ಟೆಂಬರ್, 2005

ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿಯ ಆವರಣದಲ್ಲಿ ದಿನಾಂಕ: 24.10.2005ರಂದು ಬೆಳಿಗ್ಗೆ 11.30 ಗಂಟೆಗೆ ಸಾರ್ವಜನಿಕರ ಸಮ್ಮುಖದಲ್ಲಿ ಕೆಳಕಾಣಿಸಿರುವ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡು ನಿರುಪಯುಕ್ತ ಸಣ್ಣ ಉಪಕರಣಗಳನ್ನು ಹೇಗಿವೆಯೋ ಹಾಗೆಯೇ ಬಹಿರಂಗ ಹರಾಜು ಮಾಡಲಾಗುವುದು.

1. ಹರಾಜಿನಲ್ಲಿ ಭಾಗವಹಿಸುವವರು ದಿನಾಂಕ: 24.10.2005 ರಂದು ಬೆಳಿಗ್ಗೆ 10.30 ಗಂಟೆಯೊಳಗೆ ಸಂಸ್ಥೆಯಲ್ಲಿ ಹಾಜರಿದ್ದು, ರೂ. 3000.00 ಮುಂಗಡ ಠೇವಣಿಯನ್ನು ನಗದು ರೂಪದಲ್ಲಿ ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿ ಇವರಿಗೆ ಪಾವತಿಸಿ ಹೆಸರನ್ನು ನೋಂದಾಯಿಸಿ, ಹರಾಜಿನಲ್ಲಿ ಭಾಗವಹಿಸಬಹುದು.
2. ಹರಾಜಿಗೆ ಇರಿಸಲಾಗಿರುವ ವಸ್ತುಗಳನ್ನು ಕಛೇರಿ ವೇಳೆಯಲ್ಲಿ ಬಂದು ವೀಕ್ಷಿಸಬಹುದು.
3. ಹರಾಜಿನಲ್ಲಿ ಯಶಸ್ವಿಯಾದ ಸವಾಲುದಾರರು, ಸವಾಲು ಮೊತ್ತದ ಶೇ.25ರಷ್ಟು (ಮುಂಗಡ ಠೇವಣಿ ಬಿಟ್ಟು) ಹಣವನ್ನು ನಗದು ರೂಪದಲ್ಲಿ ಸ್ಥಳದಲ್ಲಿಯೇ ಸಂದಾಯ ಮಾಡುವುದು.
4. ಹರಾಜಿನ ದಿನದಂದು ಜಾರಿಯಲ್ಲಿರುವ ಸರ್ಕಾರಿ ನಿಯಮಗಳಂತೆ ಸವಾಲು ಮೊತ್ತದ ಜೊತೆಗೆ ತೆರಿಗೆಗಳನ್ನು ಪಾವತಿಸಬೇಕಿರುತ್ತದೆ.
5. ಯಾವುದೇ ಕಾರಣ ನೀಡದೇ ಬಿಡ್ಡನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಪ್ರಾಚಾರ್ಯರು ಹೊಂದಿರುತ್ತಾರೆ.
6. ಸವಾಲುದಾರರು ಹರಾಜಿನ ನಂತರ ಬಿಡ್ಡಿನ ಸವಾಲಿಗೆ ಅನುಗುಣವಾಗಿ ಪೂರ್ತಿ ಹಣವನ್ನು ಪಾವತಿಸಿದ ನಂತರ ತಮ್ಮ ಸ್ವಂತ ಖರ್ಚಿನಲ್ಲಿ 15 ದಿನಗಳ ಒಳಗೆ ಸದರಿ ವಸ್ತುಗಳನ್ನು ವಿಲೇವಾರಿ ಮಾಡಿಕೊಳ್ಳತಕ್ಕದ್ದು.

ಹೆಚ್ಚಿನ ವಿವರಗಳನ್ನು ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿ ಇವರಿಂದ ಕಛೇರಿ ವೇಳೆಯಲ್ಲಿ ಬಂದು ಪಡೆಯಬಹುದಾಗಿದೆ.

ಪ್ರಾಚಾರ್ಯರು,

ಪಿ.ಆರ್. 537 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿ-571201, ಕೊಡಗು.

## ಮುಖ್ಯ ಇಂಜಿನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು

## ಮರು ಟೆಂಡರ್ -ಕಂ- ಹರಾಜು ಪ್ರಕಟಣೆ

### ಸಂಖ್ಯೆ: ಮುಇಂ:ಸಿಬಿಎಸ್: ಉಗ್ರಾಣ: ಕಂಪ್ಯೂಟರ್: ಹರಾಜು: 2005-06

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಬೆಂಗಳೂರಿನ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ವಲಯದ ಮುಖ್ಯ ಅಭಿಯಂತರವರ ಕಛೇರಿಯಲ್ಲಿರುವ ಅನುಪಯುಕ್ತ ಕಂಪ್ಯೂಟರ್‌ಗಳು ಮತ್ತು ಇತರೇ ಪೂರಕ ಉಪಕರಣಗಳನ್ನು ಟೆಂಡರ್-ಕಂ- ಹರಾಜು ಮೂಲಕ ವಿಲೇವಾರಿ ಮಾಡಲು ಉದ್ದೇಶಿಸಿದೆ. ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಕಂಪ್ಯೂಟರ್‌ಗಳು- ವಿವಿಧ ಕಂಪನಿಯವು | 14 ನಂ. |
| 2. | ಯುಪಿಎಸ್‌ಗಳು 1.5 ಕೆವಿಎ ಸಾಮರ್ಥ್ಯದವು | 4 ನಂ. |
| 3. | ಸ್ಟೆಬಿಲೈಜರ್‌ಗಳು- ವಿವಿಧ ಸಾಮರ್ಥ್ಯದವು | 2 ನಂ. |
| 4. | ಪ್ಲಾಟರ್ | 1 ನಂ. |
| 5. | ಪ್ರಿಂಟರ್‌ಗಳು | 6 ನಂ. |
| 6. | ಸ್ಕ್ಯಾನರ್‌ಗಳು | 1 ನಂ. |
| 7. | ಲ್ಯಾಮಿನೇಟಿಂಗ್ ಮಿಷನ್ | 1 ನಂ. |

ಇಚ್ಛಿತ ಬಿಡ್‌ದಾರರು: ಟೆಂಡರ್‌ದಾರರು ಈ ಸಾಮಗ್ರಿಗಳನ್ನು ಕಛೇರಿ ವೇಳೆಯಲ್ಲಿ ಪರಿವೀಕ್ಷಣೆ ಮಾಡಬಹುದು. ಮೇಲ್ಕಂಡ ಸಾಮಗ್ರಿಗಳನ್ನು ಎಲ್ಲಿ ಹೇಗಿವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.

ಇಚ್ಛಿತ ಟೆಂಡರ್‌ದಾರರು ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 17.10.2005 ರಿಂದ 21.10.2005 ರವರೆವಿಗೆ ಟೆಂಡರ್ ಫಾರಂನ ಮೌಲ್ಯ ಸೆಟ್ 1ಕ್ಕೆ ರೂ. 200.00ಗಳನ್ನು ಪಾವತಿ ಮಾಡಿ ಪಡೆದುಕೊಳ್ಳಬಹುದು. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ರೂ.10,000.00 ಗಳ ಇ.ಎಂ.ಡಿ. ಸಮೇತ ದಿನಾಂಕ: 24.10.2005 ರಂದು ಮಧ್ಯಾಹ್ನ 4.00 ಗಂಟೆಯೊಳಗೆ ಸಲ್ಲಿಸುವುದು. ನಂತರ ಬಂದ ಟೆಂಡರ್‌ಗಳನ್ನು ಅಥವಾ ಇ.ಎಂ.ಡಿ. ರಹಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಇ.ಎಂ.ಡಿ. ಯನ್ನು ಎಕ್ಸಿಕ್ಯೂಟೀವ್ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಸಲ್ಲಿಸುವುದು.

ದಿನಾಂಕ: 25.10.2005ರಂದು ಮಧ್ಯಾಹ್ನ 12.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಬಹಿರಂಗ ಹರಾಜು ನಡೆಸಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು (ಟೆಂಡರ್‌ದಾರರೂ ಸೇರಿದಂತೆ) 10,000 ರೂ.ಗಳನ್ನು ನಗದಾಗಿ ಇ.ಎಂ.ಡಿ. ಸಲ್ಲಿಸಿ ಹರಾಜಿನಲ್ಲಿ ಭಾಗವಹಿಸಬಹುದು.

ಹರಾಜಿನ ನಂತರ ಟೆಂಡರ್‌ಗಳನ್ನು ತೆರೆಯಲಾಗುವುದು ಟೆಂಡರ್: ಬಿಡ್‌ನ ಗರಿಷ್ಟ ಮೊಬಲಗನ್ನು ಪರಿಗಣಿಸಲಾಗುವುದು. ಉಳಿದ ಟೆಂಡರ್‌ದಾರರು: ಬಿಡ್‌ದಾರರ ಇ.ಎಂ.ಡಿ.ಯನ್ನು ಹಿಂತಿರುಗಿಸಲಾಗುವುದು. ಗರಿಷ್ಟ ಟೆಂಡರ್: ಬಿಡ್‌ನ ಅಂಗೀಕಾರವು ಸಕ್ಷಮ ಪ್ರಾಧಿಕಾರದ ಅಧಿಕಾರಕ್ಕೊಳಪಟ್ಟಿರುತ್ತದೆ.

ಯಾವುದೇ ಕಾರಣವನ್ನು ನೀಡದೆ ಅಥವಾ ಎಲ್ಲಾ ಟೆಂಡರ್: ಬಿಡ್‌ನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಸಕ್ಷಮ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.

ಮುಖ್ಯ ಇಂಜಿನಿಯರ್,

ಪಿ.ಆರ್. 538 ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು.

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1

## ಟೆಂಡರ್ ಪ್ರಕಟಣೆ

### ಸಂಖ್ಯೆ: ತೋಉನಿ/ ಕಉ/ ವಿನಿ2/ ಬಿಜಿಟಿ/ 10/ 2005-06, ದಿನಾಂಕ: 5ನೇ ಸೆಪ್ಟೆಂಬರ್, 2005

ಕಬ್ಬನ್ ಉದ್ಯಾನವನ ಪ್ರವೇಶ ದ್ವಾರಗಳು ಸೇರಿದಂತೆ ಕಬ್ಬನ್ ಉದ್ಯಾನವನದ ಆಂತರಿಕ ಸಂಪೂರ್ಣ ಭದ್ರತೆ ಸೇವೆಗಳಿಗಾಗಿ ಅಧಿಕೃತ ಸೆಕ್ಯೂರಿಟಿ ಏಜೆನ್ಸಿಯಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಈ ಮುಂದೆ ಸೂಚಿಸಿರುವ ಭದ್ರತೆ ಕೆಲಸವನ್ನು ನಿರ್ವಹಿಸಲು ಈ ಕಛೇರಿಯ ನಿಬಂಧನೆ ಮತ್ತು ಷರತ್ತುಗಳಿಗೆ ಒಪ್ಪಿದಲ್ಲಿ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಬಹುದು, ಟೆಂಡರ್ ಫಾರಂಗಳನ್ನು ದಿನಾಂಕ: 01.10.2005 ರಿಂದ 05.10.2005 ವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಒಂದು ಫಾರಂಗೆ ರೂ.500-00 ಪಾವತಿ ಮಾಡಿ ಪಡೆಯಬಹುದು. ಭದ್ರತೆ ಸೇವೆಯನ್ನು ಕನಿಷ್ಟ 21 ಜನ ಸೆಕ್ಯೂರಿಟಿ ಸಿಬ್ಬಂದಿಯನ್ನು (ಒಂದು ಪಹರೆಗೆ 7 ಸಿಬ್ಬಂದಿಯಂತೆ 3 ಪಹರೆಗಳಲ್ಲಿ) ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಮಾತ್ರ ಸೀಮಿತವಾಗಿರುತ್ತದೆ. ಸೀಲ್ಡ್ ಮಾಡಿದ ಟೆಂಡರ್‌ಗಳನ್ನು ದಿನಾಂಕ: 06.10.2005 ರಂದು ಸಂಜೆ 4.00 ಗಂಟೆಯ ಒಳಗೆ ಈ ಕಛೇರಿಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ದಿನಾಂಕ: 06.10.2005 ರಂದು ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ನಿರ್ವಹಿಸಬೇಕಾದ ಭದ್ರತೆ ಸೇವೆಗಳು:**

1) ವರ್ಷದ 365 ದಿನಗಳಲ್ಲಿ 24 ಗಂಟೆಗಳ ಸಂಪೂರ್ಣ ಭದ್ರತಾ ಸೇವೆಯನ್ನು ಕಬ್ಬನ್ ಉದ್ಯಾನವನದಲ್ಲಿ ನಿರ್ವಹಿಸಬೇಕು. ಕಬ್ಬನ್ ಉದ್ಯಾನವನದ ಮರ, ಗಿಡ, ಸಸಿಗಳು, ಎಲ್ಲಾ ಕಟ್ಟಡಗಳು, ತೋಟದಲ್ಲಿ ಸಾಮಾನು ಸರಂಜಾಮುಗಳು, ಕುಂಡಗಳು ಹಾಗೂ ವಿದ್ಯುತ್ ದೀಪಗಳು, ಕೊಳವೆ ಬಾವಿಗಳು, ಮೋಟಾರ್ ಪಂಪುಗಳು, ವಾಹನಗಳು ಇತ್ಯಾದಿಗಳನ್ನು ಸರ್ವತೋಮುಖವಾಗಿ ಭದ್ರತೆ ನೀಡಿ ರಕ್ಷಿಸುವ ಕಾರ್ಯ ನಿರ್ವಹಿಸಬೇಕು.

2) ಕಬ್ಬನ್ ಉದ್ಯಾನವನದಲ್ಲಿನ ಮರ, ಗಿಡ, ಸಸಿಗಳಿಗೆ ಹಾನಿ ಮಾಡುವುದು, ಮರ ಹತ್ತುವುದು, ಮರದ ಕೊಂಬೆಗಳಿಗೆ ಜೋತು ಬೀಳುವುದು, ಮರದ ಮೇಲೆ ಹೆಸರು ಕೆತ್ತುವುದು, ಸಸಿ ಹೂವುಗಳನ್ನು ಮತ್ತು ಕಾಯಿ ಹಣ್ಣು ಕೀಳುವುದು, ಕೊಂಬೆಗಳಿಗೆ ಉಯ್ಯಾಲೆ ಕಟ್ಟುವುದು ಇತ್ಯಾದಿ ಚಟುವಟಿಕೆಗಳನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಗಿಡಗಳು, ಸಸಿಗಳು, ಬೀಜಗಳನ್ನು, ಹುಲ್ಲು ಇತ್ಯಾದಿಯನ್ನು ಸಂಗ್ರಹಿಸುವುದಾಗಲೀ ಅಥವಾ ಕಬ್ಬನ್ ಉದ್ಯಾನವನ ಹೊರಗೆ ಅಧಿಕೃತ ಅನುಮತಿ ಪತ್ರ ಇಲ್ಲದೆ ಸಾಗಿಸುವುದನ್ನು ನಿರ್ಬಂಧಿಸಬೇಕು.

3) ಕಬ್ಬನ್ ಉದ್ಯಾನವನದ ಒಳಗೆ ಅನಧಿಕೃತವಾಗಿ ಸಾರ್ವಜನಿಕರಿಗೆ ಬೀಜಗಳು, ಗಿಡಗಳು ಹಾಗೂ ತಿಂಡಿ ತಿನಿಸುಗಳು ಇತರೆ ಯಾವುದೇ ವಸ್ತುಗಳು/ ಪದಾರ್ಥಗಳನ್ನು ಇಲಾಖಾ ನೌಕರರೇ ಆಗಲಿ ಅಥವಾ ಸಾರ್ವಜನಿಕರೇ ಆಗಲಿ ಮಾರಾಟ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ವಿಶೇಷವಾಗಿ ಫಲಪುಷ್ಪ ಪ್ರದರ್ಶನದ ಸಂದರ್ಭದಲ್ಲಿ ಇಲಾಖೆಯವರು ಅಥವಾ ಅಧಿಕೃತವಾಗಿ ಪರವಾನಗಿ ಪಡೆದು ಪ್ರದರ್ಶನ/ ಮಾರಾಟ ಮಳಿಗೆಯನ್ನು ಹೊಂದಿರುವ ಖಾಸಗಿಯವರು ಮಾತ್ರ ನಿಗದಿಪಡಿಸಿದ ಸ್ಥಳದಲ್ಲಿ ಮಾತ್ರ ಮಾರಾಟ ಮಾಡುವಂತೆ ನಿರ್ದೇಶಿಸಬೇಕು.

4) ಕಬ್ಬನ್ ಉದ್ಯಾನವನದ ಒಳಗೆ ಸರ್ಕಾರಿ ವಾಹನಗಳು ಮತ್ತು ಸರ್ಕಾರಿ ಕೆಲಸದ ಮೇಲೆ ಬರುವ ಖಾಸಗಿ ವಾಹನಗಳನ್ನು ಹೊರತುಪಡಿಸಿ ಖಾಸಗಿ ವಾಹನಗಳು ಪ್ರವೇಶ ಮಾಡುವುದು, ಸಸ್ಯ ತೋಟದ ಒಳಗೆ ಓಡಾಡುವುದು, ಎಲ್ಲೆಂದರಲ್ಲಿ ನಿಲುಗಡೆ ಮಾಡುವುದು, ದುರಸ್ಥಿಪಡಿಸುವುದು, ತೊಳೆಯುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.

5) ಕಬ್ಬನ್ ಉದ್ಯಾನವನದಲ್ಲಿರುವ ಕೊಳವೆ ಬಾವಿಗಳು, ವಿದ್ಯುತ್ ಮೋಟಾರ್ ಪಂಪ್‌ಗಳು, ವಿದ್ಯುತ್ ಪ್ಯಾನಲ್ ಬೋರ್ಡ್‌ಗಳು (ಕ್ಯೂಬಿಕಲ್ ಔಟ್‌ಡೋರ್ ಬಾಕ್ಸ್) ಸಸ್ಯಾಗಾರಗಳಲ್ಲಿ ವಿದ್ಯುತ್ ಮೋಟಾರ್‌ಗಳು ಮತ್ತು ಕಾರಂಜಿಗಳಿಗೆ ಅಳವಡಿಸಿದ ಚಾನಲ್ಸ್ ವಿದ್ಯುತ್ ಮೋಟಾರ್‌ಗಳು, ವಿದ್ಯುತ್ ಬಣ್ಣದ ದೀಪಗಳಿಗೆ ಮತ್ತು ಕುಡಿಯುವ ನೀರಿಗಾಗಿ ಅಳವಡಿಸಿರುವ ವಾಟರ್ ಸ್ಟೋರೇಜ್ ಟ್ಯಾಂಕ್ (ಸಿಂಟೆಕ್ಸ್ ಟ್ಯಾಂಕ್‌ಗಳು) ಸಸ್ಯ ತೋಟದಲ್ಲಿ ಅಳವಡಿಸಿರುವ ವಾಲ್ವ್‌ಗಳು, ನೀರಿನ ಕೊಳಾಯಿಗಳು ಇತ್ಯಾದಿಗಳಿಗೆ ಹಾನಿ ಆಗದಂತೆ ಮತ್ತು ಕಳವು ಆಗದಂತೆ ಸಂರಕ್ಷಿಸಬೇಕು.

6) ಉದ್ಯಾನವನದಲ್ಲಿ ಅಳವಡಿಸಿರುವ ತುಂತುರು ನೀರಾವರಿ/ ಹನಿ ನೀರಾವರಿ ಪದ್ಧತಿಯಲ್ಲಿ ಅಳವಡಿಸಿರುವ ಉಪಕರಣಗಳಿಗೆ, ಕೊಳವೆಗಳಿಗೆ ಹಾನಿ ಆಗದಂತೆ ಅಥವಾ ಕಳವು ಆಗದಂತೆ ಸಂರಕ್ಷಿಸಬೇಕು.

7) ಕಬ್ಬನ್ ಉದ್ಯಾನವನದ ಒಳಗಿನ ವಿದ್ಯುತ್ ದೀಪಗಳನ್ನು ಹಾಗೂ ದ್ವಾರಗಳಲ್ಲಿನ ಅಲಂಕಾರಿಕ ವಿದ್ಯುತ್ ದೀಪಗಳಿಗೆ ವಿದ್ಯುತ್ ಕೇಬಲ್ಸ್, ಕಂಟ್ರೋಲ್ ಸ್ವಿಚ್ ಬೋರ್ಡ್‌ಗಳಿಗೆ ಹಾನಿ ಆಗುವುದನ್ನು ಅಥವಾ ಕಳ್ಳತನ ಆಗುವುದನ್ನು ತಡೆಗಟ್ಟಬೇಕು.

8) ಕಬ್ಬನ್ ಉದ್ಯಾನವನದಲ್ಲಿ ಪಕ್ಷಿಗಳನ್ನು ಹಿಡಿಯುವುದು ಮತ್ತು ಫೌಂಟನ್‌ಗಳಲ್ಲಿ ಮಣ್ಣು, ಕಲ್ಲು, ಪ್ಲಾಸ್ಟಿಕ್ ಎಸೆಯುವುದು, ವಿಗ್ರಹಗಳನ್ನು ಪ್ರತಿಷ್ಠಾಪಿಸುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.

9) ಕಬ್ಬನ್ ಉದ್ಯಾನವನದ ಒಳಗೆ ಒಣಗಿದ ಮರದ ಎಲೆ, ಹುಲ್ಲು, ಮರದ ರೆಂಬೆಗಳಿಗೆ ಕಾಗದ ಕಾಂಪೋಸ್ಟ್, ಗುಂಡಿ ಇತ್ಯಾದಿಗಳಿಗೆ ಸಾರ್ವಜನಿಕರು/ ದುಷ್ಕರ್ಮಿಗಳು ಬೆಂಕಿ ಹಚ್ಚದಂತೆ ಸಂಪೂರ್ಣವಾಗಿ ಎಚ್ಚರ ವಹಿಸಬೇಕು. ಆಕಸ್ಮಿಕವಾಗಿ ಬೆಂಕಿ ಬಿದ್ದಂತಹ ಸಮಯದಲ್ಲಿ ತಕ್ಷಣ ಫೈರ್ ಸರ್ವೀಸ್ ಹಾಗೂ ಈ ಕಛೇರಿಗೂ ವರದಿ ಮಾಡಬೇಕು.

10) ಕಬ್ಬನ್ ಉದ್ಯಾನವನದ ಒಳಗೆ ಪ್ರವಾಸಿಗರು/ ಸಾರ್ವಜನಿಕರು ಯಾವ ಸಮಯದಲ್ಲಿ ಆಗಲಿ ಮಲ-ಮೂತ್ರ ವಿಸರ್ಜನೆ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಸಾಕಿದ/ ಬೀದಿ ನಾಯಿಗಳನ್ನು ತರುವುದನ್ನು/ ಬರುವುದನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಅಳವಡಿಸಿರುವ ಮರದ ಸಿಮೆಂಟ್/ ಮೊಸಾಯಿಕ್ ಬೆಂಚುಗಳ ಮೇಲೆ ಮಲಗುವುದನ್ನು ಮತ್ತು ವ್ಯಾಯಾಮ ಮಾಡುವುದನ್ನು ನಿರ್ಬಂಧಿಸಬೇಕು.

11) ಕಬ್ಬನ್ ಉದ್ಯಾನವನದ ಒಳಗೆ ಅಧಿಕೃತ ಪರವಾನಗಿ ಇಲ್ಲದೆ ಚಲನಚಿತ್ರ/ ಧಾರವಾಹಿ/ ವೀಡಿಯೊ ಚಿತ್ರೀಕರಣ ಮಾಡುವುದನ್ನು ತಡೆಯಬೇಕು. ಕಬ್ಬನ್ ಉದ್ಯಾನವನದ ಒಳಗೆ ಶಾಸ್ತ್ರ ಹೇಳುವುದನ್ನು, ಅನಧಿಕೃತ ಮಾರ್ಗದರ್ಶಿಗಳನ್ನು (ಗೈಡ್ಸ್) ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ತೋಟಗಾರಿಕೆ ಚಟುವಟಿಕೆಗಳನ್ನು ಬಿಟ್ಟು ಯಾವುದೇ ಪ್ರಾರ್ಥನೆ ಮತೀಯ ಅಥವಾ ಸಭೆ ಸಮಾರಂಭ ಇನ್ನಿತರ ಚಟುವಟಿಕೆಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಭಿಕ್ಷುಕರು ಭಿಕ್ಷಾಟನೆ ಮಾಡುವುದನ್ನು, ಧೂಮಪಾನ, ಮದ್ಯಪಾನ, ಮಾದಕ ವಸ್ತುಗಳ ಸೇವನೆ, ಜೂಜು, ಲೈಂಗಿಕ ಚಟುವಟಿಕೆಗಳು ಇತ್ಯಾದಿಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.

12) ಸಾರ್ವಜನಿಕರು ಹೊರಗಿನಿಂದ ಬ್ರೆಡ್ ಇತ್ಯಾದಿ ತಿನಿಸುಗಳನ್ನು ನಾಯಿಗಳಿಗೆ/ ಕೋತಿಗಳಿಗೆ ಹಾಕುವುದು, ಕಾಗೆಗಳಿಗೆ, ಹಕ್ಕಿಗಳಿಗೆ ಕಾಳುಗಳನ್ನು ಹಾಕುವುದು ಮತ್ತು ಇರುವೆಗಳಿಗೆ ಸಕ್ಕರೆ ಹಾಕುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.

13) ಕಬ್ಬನ್ ಉದ್ಯಾನವನ ವೀಕ್ಷಣೆಗೆ ಬರುವಂತಹ ಪ್ರವಾಸಿಗರಿಗೆ ಯಾವುದೇ ಸುಲಿಗೆ ದಬ್ಬಾಳಿಕೆಯಂತಹ ಚಟುವಟಿಕೆಗಳು ಕಂಡುಬಂದಲ್ಲಿ ತಕ್ಷಣ ಪೊಲೀಸ್ ಠಾಣೆಗೆ ದೂರು ನೀಡತಕ್ಕದ್ದು.

14) ಕಬ್ಬನ್ ಉದ್ಯಾನವನದ ಒಳಗೆ ಬರುವಂತಹ ಪ್ರವಾಸಿಗರು ತಿಂಡಿ ತಿನಿಸುಗಳನ್ನು ತಂದು ತಿಂದ ನಂತರ ತ್ಯಾಜ್ಯ ವಸ್ತುಗಳನ್ನು ಉದ್ಯಾನಗಳಲ್ಲಿ/ ಹುಲ್ಲು ಹಾಸುಗಳ ಮೇಲೆ ಬಿಸಾಡದೆ ಕಸದ ತೊಟ್ಟಿಯಲ್ಲಿಯೇ ಹಾಕುವಂತೆ ಸೂಚಿಸುವುದು.

15) ಕಬ್ಬನ್ ಉದ್ಯಾನವನದ ಒಳಗೆ ರಾತ್ರಿ 8.00 ಗಂಟೆಯಿಂದ ಬೆಳಿಗ್ಗೆ 6.00 ಗಂಟೆಯವರೆಗೆ ಕರ್ತವ್ಯದಲ್ಲಿರುವ ಅಧಿಕಾರಿ/ ನೌಕರರನ್ನು ಹೊರತುಪಡಿಸಿ ಸಾರ್ವಜನಿಕರನ್ನು ಹೊರಗೆ ಕಳುಹಿಸಬೇಕು. ಕಛೇರಿ ವೇಳೆ ಅಥವಾ ಕಛೇರಿ ವೇಳೆ ನಂತರದ ಸಮಯದಲ್ಲಿ ಅನಧಿಕೃತ ವ್ಯಕ್ತಿಗಳ ಚಲನವಲನಗಳನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಕಾಂಪೌಂಡ್ ದಾಟುವುದು ಅಥವಾ ಕಾಂಪೌಂಡ್ ಗೋಡೆಯಿಂದ ಗಿಡ, ಮರ, ಸೌದೆ ಇತ್ಯಾದಿಗಳನ್ನು ಸಾಗಿಸುವುದನ್ನು ನಿರ್ಬಂಧಿಸಬೇಕು.

16) ಕಬ್ಬನ್ ಉದ್ಯಾನವನದ ಒಳಗೆ ಆಕಸ್ಮಿಕವಾಗಿ ಯಾರಾದರೂ ಮರಣ ಹೊಂದಿದಾಗ ತಕ್ಷಣ ಪೊಲೀಸ್ ಠಾಣೆಗೆ ದೂರು ನೀಡಿ ಈ ಕಛೇರಿಗೆ ವರದಿ ಮಾಡಬೇಕು.

17) ಭದ್ರತೆಗಾಗಿ ನೇಮಿಸುವ ಭದ್ರತಾ ಸಿಬ್ಬಂದಿಯು ಕರ್ತವ್ಯದ ಮೇಲೆ ಇರುವಾಗ ಸಮವಸ್ತ್ರ/ ಗುರುತಿನ ಬ್ಯಾಡ್ಜ್ ಧರಿಸಿರಬೇಕು. ಹಾಗೂ ಶಿಸ್ತು ಸಂಯಮದೊಂದಿಗೆ ಸಾರ್ವಜನಿಕರೊಡನೆ ಉತ್ತಮ ನಡೆ, ನುಡಿ ಇರುವಂತಹ ಸಿಬ್ಬಂದಿಯನ್ನು ಮಾತ್ರ ನೇಮಿಸಬೇಕು. ಸಿಬ್ಬಂದಿ ವರ್ಗದವರು ಕನ್ನಡ ಮತ್ತು ಆಂಗ್ಲ ಭಾಷೆಯನ್ನು ಚೆನ್ನಾಗಿ ಉಪಯೋಗಿಸುವ ಅರ್ಹತೆ ಇರಬೇಕು. ಯಾವುದೇ ಕಾರಣಕ್ಕೆ ಕರ್ತವ್ಯದ ಮೇಲೆ ಇರುವ ಸೆಕ್ಯೂರಿಟಿ ಸಿಬ್ಬಂದಿಯು ಧೂಮಪಾನ, ಮದ್ಯಪಾನ ಮಾಡಬಾರದು. ದಿನದ 24 ಗಂಟೆಗಳ ಸಂರಕ್ಷಣೆಯನ್ನು 3 ಪಾಳಿಗಳಲ್ಲಿ ವ್ಯವಸ್ಥಿತವಾಗಿ ನಿರ್ಬಂಧಿಸಬೇಕು.

18) ಸಾರ್ವಜನಿಕ ರಜೆಯ ದಿನಗಳಂದು ಮತ್ತು ಪ್ರತಿ ವರ್ಷ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಅವಧಿಯಲ್ಲಿ ಅಲಂಕಾರಿಕ ಕುಂಡಗಳನ್ನು ಕಬ್ಬನ್ ಉದ್ಯಾನವನದಲ್ಲಿರುವ ಪ್ರತಿಮೆಗಳ ಸುತ್ತ ಜೋಡಿಸುವುದರಿಂದ ಇವುಗಳಿಗೆ ವಿಶೇಷ ಭದ್ರತೆ ನಿರ್ವಹಣೆಯನ್ನು ಮಾಡಬೇಕು.

19) ಕಬ್ಬನ್ ಉದ್ಯಾನವನದಲ್ಲಿ ಕಾರ್ಯ ನಿರ್ವಹಿಸುವ ಸಿಬ್ಬಂದಿಯ ಮೇಲೆ ದುಷ್ಕರ್ಮಿಗಳು ಮಾಡುವ ಹಲ್ಲೆಯಂತಹ ಚಟುವಟಿಕೆಗಳನ್ನು ನಿರ್ಬಂಧಿಸಬೇಕು.

20) ಕಬ್ಬನ್ ಉದ್ಯಾನವನದಲ್ಲಿ ಯಾವುದೇ ಕ್ರೀಡೆ, ಆಟಗಳು, ಸಂಗೀತೋತ್ಸವ ಶಿಬಿರಗಳು ಇತ್ಯಾದಿಗಳನ್ನು ನಿರ್ಬಂಧಿಸಬೇಕು. ಗುಲಾಬಿವನ ಮತ್ತು ತಾವರೆಕೊಳದಲ್ಲಿನ ಹೂವುಗಳನ್ನು ಸಂರಕ್ಷಿಸಬೇಕು.

21) ಮೇಲೆ ನೀಡಿದ ಷರತ್ತುಗಳನ್ನು ಹೊರತುಪಡಿಸಿ ಕಾಲಕಾಲಕ್ಕೆ ನೀಡುವ ಸೂಚನೆಗಳನ್ನು ಪಾಲಿಸತಕ್ಕದ್ದು.

## ಷರತ್ತು ಹಾಗೂ ನಿಬಂಧನೆಗಳು

1) ಟೆಂಡರ್‌ಗಳನ್ನು ಈ ಕಛೇರಿಯಿಂದ ಖರೀದಿಸಿದ ನಿಗದಿತ ಟೆಂಡರ್ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು. ಟೆಂಡರ್ ಸಲ್ಲಿಸುವಾಗ ರೂ.50,000-00ಗಳ ಭದ್ರತಾ ಠೇವಣಿಯನ್ನು ಬ್ಯಾಂಕ್ ಡ್ರಾಫ್ಟ್/ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿಗೆ ಪಡೆದು ಸಲ್ಲಿಸಬೇಕು. ಹಾಗೂ ರೂ. 50,000-00 ಗಳ ಮೌಲ್ಯದ ಸಾಲ್ವೆನ್ಸಿ ಪತ್ರವನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸಲ್ಲಿಸಬೇಕು. ಕಡಿಮೆ ದರವನ್ನು ನಮೂದಿಸಿರುವ ಯಶಸ್ವಿ ಟೆಂಡರ್‌ದಾರರ ಠೇವಣಿ ಹಣವನ್ನು ಬಿಟ್ಟು ಉಳಿದ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್ ತೆರೆಯುವ ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು. ಅಂಗೀಕೃತ ಟೆಂಡರ್‌ದಾರರ ಠೇವಣಿಯನ್ನು ಭದ್ರತಾ ಸೇವೆಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದ ನಂತರ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು.

2) ಭದ್ರತಾ ಸೇವೆಯನ್ನು ನಿಗದಿತ ಅವಧಿಯ ಮೊದಲೆ ಸ್ಥಗಿತಗೊಳಿಸಿದಲ್ಲಿ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಮತ್ತು ಭದ್ರತಾ ಸೇವೆಯಲ್ಲಿ ಯಾವುದೇ ನ್ಯೂನತೆಗಳು/ ಲೋಪದೋಷಗಳು (ಅಂದರೆ ನಿರ್ವಹಿಸಬೇಕಾದ ಕಾರ್ಯಕ್ರಮಗಳಲ್ಲಿ ಕ್ರಮ ಸಂಖ್ಯೆ 1 ರಿಂದ 20ರವರೆಗೆ) ಕೆಲಸದಲ್ಲಿ ಕಂಡುಬಂದಲ್ಲಿ ಪ್ರತಿ ತಿಂಗಳು ಪಾವತಿ ಮಾಡುವ ಟೆಂಡರ್ ಮೊತ್ತದಲ್ಲಿ ಶೇಕಡ 15 ಕಡಿತಗೊಳಿಸಲಾಗುವುದು. ಹಾಗೂ ವಾಹನ, ಗಣಕ ಯಂತ್ರಗಳು, ಬೆರಳಚ್ಚು ಯಂತ್ರಗಳು, ಟಿ.ವಿ. ಗಿಡಗಳು, ಮೋಟಾರ್, ಪಂಪುಗಳು, ಪೀಠೋಪಕರಣಗಳು ಇತ್ಯಾದಿಗಳ ಕಳವಿನಿಂದ ಸಂಭವಿಸಬಹುದಾದ ನಷ್ಟವನ್ನು ನಿರ್ದೇಶಕರು ನಿಗದಿಪಡಿಸುವ ಮೌಲ್ಯವನ್ನು ಗುತ್ತಿಗೆ ಹಣದಿಂದ ಕಡಿತಗೊಳಿಸಲಾಗುವುದು.

3) ಕಡಿಮೆ ದರವನ್ನು ನಮೂದಿಸಿರುವ ಟೆಂಡರ್‌ನ್ನು ಅನುಮೋದಿಸಿದ ನಂತರ ಭದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಯಶಸ್ವಿ ಟೆಂಡರ್‌ದಾರರು ರೂ. 2.00 ಲಕ್ಷಕ್ಕೆ ರಾಷ್ಟ್ರೀಕೃತ ಬ್ಯಾಂಕ್ ಒಂದರಿಂದ ಪಡೆದ ಗ್ಯಾರಂಟಿ ಪತ್ರವನ್ನು ಪಡೆದು ಸಲ್ಲಿಸಬೇಕು. ಸರ್ಕಾರ/ ಸರ್ಕಾರೇತರ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಿರುವುದರ ಬಗ್ಗೆ ಕನಿಷ್ಟ 3 ವರ್ಷಗಳ ಅನುಭವ / ತೃಪ್ತಿಕರ ಪ್ರಮಾಣ ಪತ್ರ ಲಗತ್ತಿಸಿರಬೇಕು.

ಕಬ್ಬನ್ ಉದ್ಯಾನವನದ ಕಛೇರಿಯಲ್ಲಿ ಪ್ರತಿ ದಿನ ಕಾರ್ಯ ನಿರ್ವಹಿಸುವ/ ಪಾಳಿಯಲ್ಲಿ ಕಾರ್ಯನಿರ್ವಹಿಸುವ ವ್ಯಕ್ತಿಗಳ ಹೆಸರನ್ನು ಒಳಗೊಂಡ ಪುಸ್ತಕಗಳನ್ನು ಇಡಬೇಕು/ ಪ್ರತಿ ಪಾಳಿಗಳಲ್ಲಿ ಸಹಿ ಮತ್ತು ವೇಳೆಯನ್ನು ನಮೂದಿಸಬೇಕು ಹಾಗೂ ಕಾರ್ಮಿಕ ಇಲಾಖೆಯಿಂದ ಅನುಮತಿ ಪತ್ರವನ್ನು ಆದಾಯ ಇಲಾಖೆಯಿಂದ ಪಡೆದ 2004-05ನೇ ಸಾಲಿನ ಆದಾಯ ತೆರಿಗೆ ಕ್ಲಿಯರೆನ್ಸ್ ಪತ್ರ ಪಡೆದು ಸಲ್ಲಿಸಬೇಕು. ಈ ದೃಢೀಕರಣ ಪತ್ರಗಳನ್ನು ಸಲ್ಲಿಸಲು ತಪ್ಪಿದಲ್ಲಿ ರೂ. 50,000-00 ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮರು ಟೆಂಡರ್ ಪ್ರಕ್ರಿಯೆ ನಡೆಸಲಾಗುವುದು.

4) ಭದ್ರತಾ ಸೇವೆಯನ್ನು ನಿಗದಿಗೊಳಿಸಿದ ಎರಡು ವರ್ಷದ ಒಳಗೆ ಮೊಟಕುಗೊಳಿಸುವ ಅಥವಾ ರದ್ದುಪಡಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರು ಹೊಂದಿರುತ್ತಾರೆ ಮತ್ತು ಟೆಂಡರ್‌ನ್ನು ಕಾರಣ ನೀಡದೆ ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರಲ್ಲಿ ಕಾಯ್ದಿರಿಸಲಾಗಿದೆ.

5) ಯಶಸ್ವಿ ಟೆಂಡರ್‌ದಾರರು ಭದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಟೆಂಡರ್ ಅನುಮೋದಿಸಿ ದೃಢೀಕರಣ ಪತ್ರಗಳನ್ನು ಸಲ್ಲಿಸಲು ಸೂಚಿಸಿದ ನಂತರ ಈ ಪ್ರಕಟಣೆಯಲ್ಲಿ ನಮೂದಿಸಿರುವ ಷರತ್ತುಗಳು (1 ರಿಂದ 5) ಮತ್ತು ನಿರ್ವಹಿಸಬೇಕಾದ ಕೆಲಸಗಳಿಗೆ (1 ರಿಂದ 20) ಬದ್ಧನಾಗಿರುತ್ತೇನೆ ಎಂದು ರೂ. 200-00 ಛಾಪಾ ಕಾಗದದ ಮೇಲೆ ಮುಚ್ಚಳಿಕೆ ಪತ್ರವನ್ನು ಬರೆದು ನೋಟರಿ ಮಾಡಿಸಿ ಈ ಕಛೇರಿಗೆ ಸಲ್ಲಿಸಬೇಕು.

6) ಟೆಂಡರ್‌ದಾರರು ಕಾರ್ಮಿಕ ಇಲಾಖೆಯವರು ನಿಗದಿಪಡಿಸಿದ ವೇತನವನ್ನು ಭದ್ರತಾ ಸಿಬ್ಬಂದಿಗೆ (ಮಿನಿಮಮ್ ವೇಜಸ್) ನೀಡತಕ್ಕದ್ದು.

ಹೆಚ್ಚಿನ ವಿಷಯಗಳಿಗೆ ಈ ಕೆಳ ಸಹಿದಾರರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ತೋಟಗಾರಿಕೆ ಉಪ ನಿರ್ದೇಶಕರು,

ಪಿ.ಆರ್. 539

ಕಬ್ಬನ್ ಉದ್ಯಾನವನ, ಬೆಂಗಳೂರು.